## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 566

ಸದಸ್ಯರ ಹೆಸರು : ಶ್ರೀ ಅ.ದೇವೇಗೌಡ (ಪದವೀಧರರ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ : 24.09.2020

ಉತ್ತರಿಸಬೇಕಾದ ಸಚಿವರು : ಮಾನ್ಯ ಮುಖ್ಯಮಂತ್ರಿರವರು

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಬರುವ ವಾರ್ಡ್ ಸಂಖ್ಯೆ-42 ರಲ್ಲಿನ ಕಂಠೀರವ ಸ್ಟುಡಿಯೋ ಸೋನಾಲ್ ಗಾರ್ಮೆಂಟ್ ನಿಂದ ಹಾದು ಹೋಗುವ ರಸ್ತೆಯಲ್ಲಿನ ಸುಭಾಶ್ಚಂದ್ರ ವೃತ್ತದಲ್ಲಿ ನಿರ್ಮಾಣವಾಗುತ್ತಿರುವ ಅಂಡರ್ ಪಾಸ್ ನ ಕಾಮಗಾರಿಯು ಯಾವಾಗ ಪ್ರಾರಂಭವಾಯಿತು: | ಕಂಠೀರವ ಗ್ರೇಡ್ ಸೆಪರೇಟರ್ ಯೋಜನೆಯನ್ನು ದಿನಾಂಕ: 02.05.2012 ರಲ್ಲಿ ಪ್ರಾರಂಭಿಸಲಾಯಿತು. |
| ಆ) | ಸದರಿ ಕಾಮಗಾರಿಯು ಅರ್ಧದಲ್ಲಿಯೇ ಅಪೂರ್ಣ ಸ್ಥಿತಿಯಲ್ಲಿದ್ದು, ವಾಹನ ಸಂಚಾರದ ದಟ್ಟಣೆಯಿಂದ ಸಾರ್ವಜನಿಕರಿಗೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಇ) | ಈ ಕಾಮಗಾರಿ ಸ್ಥಗಿತಕ್ಕೆ ಕಾರಣವೇನು; ಕಾರಣದಾದವರ ಮೇಲೆ ಯಾವ ಕ್ರಮ ಕೈಗೊಳ್ಳಲಾಗುವುದು; ಮತ್ತು ಕಾಮಗಾರಿಯನ್ನು ಯಾವಾಗ ಪೂರ್ಣಗೊಳಿಸಲಾಗುವುದು? | ಶ್ರೀ ಕಂಠೀರವ ಸ್ಟುಡಿಯೋ ಗ್ರೇಡ್ ಸೆಪರೇಟರ್ ಕಾಮಗಾರಿಗಾಗಿ ಭೂಸ್ವಾಧೀನದ ವೆಚ್ಚ ಅತೀ ದುಬಾರಿಯಾಗಿದ್ದು, ದಿನಾಂಕ: 05.03.2018 ರಂದು ನಡೆದ ಪ್ರಾಧಿಕಾರದ ವಿಷಯ ಸಂಖ್ಯೆ.53/2018 ರಂತೆ ಯೋಜನೆಯನ್ನು ಕೈಬಿಡಲು ತೀರ್ಮಾನಿಸಲಾಗಿರುತ್ತದೆ.<br><br>ಸದರಿ ಯೋಜನೆಗೆ ಅಗತ್ಯವಿರುವ 10172.32 ಚ.ಮೀ ಜಮೀನನ್ನು ಭೂಸ್ವಾಧೀನ ಪಡಿಸಿಕೊಂಡಲ್ಲಿ ಹಾಗೂ ಯೋಜನೆಯನ್ನ ತುಲನೆ ಮಾಡಿದ್ದಲ್ಲಿ, ಭೂ ಪರಿಹಾರವು ಅತ್ಯಂತ ದುಬಾರಿಯಾಗಿರುವುದರಿಂದ ಸದರಿ ಯೋಜನೆಯನ್ನು ಕೈಬಿಡುವುದು ಉತ್ತಮವೆಂದು ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ದಿನಾಂಕ: 01.07.2020 ರಂದು ನಡೆದ ಸಭಾ ನಡವಳಿಯಲ್ಲಿ ನಿರ್ಣಯಿಸಲಾಗಿದೆ. |

ಸಂಖ್ಯೆ: ನಅಇ 59 ಬೆಂಭೂಸ್ವಾ 2020

ಬಿ.ಎಸ್. ಯಡಿಯೂರಪ್ಪ

(ಬಿ.ಎಸ್. ಯಡಿಯೂರಪ್ಪ)

ಮುಖ್ಯಮಂತ್ರಿ